

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 37 |
| ಸದಸ್ಯರ ಹೆಸರು | ಶ್ರೀ ಎನ್. ರವಿಕುಮಾರ್ (ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | 14.09.2021 |
| ಉತ್ತರಿಸುವ ಸಚಿವರು | ಗಣಿ ಮತ್ತು ಭೂವಿಜ್ಞಾನ ಹಾಗೂ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು ವಿಕಲಚೇತನರ, ಹಿರಿಯ ನಾಗರಿಕರ ಸಬಲೀಕರಣ ಸಚಿವರು. |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಮಂಡ್ಯ ಜಿಲ್ಲೆಯ ಪಾಂಡವಪುರ ತಾಲ್ಲೂಕು ಬೇಬಿ ಬೆಟ್ಟದಲ್ಲಿ ಕಲ್ಲು ಗಣಿಗಾರಿಕೆ ಮಾಡಲು ಅನುಮತಿ ನೀಡಲಾಗಿದೆಯೇ; ಎಷ್ಟು ವರ್ಷಗಳಿಂದ ಇಲ್ಲಿ ಕಲ್ಲು ಗಣಿಗಾರಿಕೆ ಮಾಡಲಾಗುತ್ತಿದೆ; | • ಮಂಡ್ಯ ಜಿಲ್ಲೆ, ಪಾಂಡವಪುರ ತಾಲ್ಲೂಕು, ಬೇಬಿ ಬೆಟ್ಟದ ವ್ಯಾಪ್ತಿಯಲ್ಲಿ 1986ನೇ ಸಾಲಿನಿಂದ ಕಂದಾಯ ಇಲಾಖೆಯ ನಿರಾಕ್ಷೇಪಣ ಪತ್ರವನ್ನು ಪಡೆದು 117 ಕಲ್ಲುಗಣಿ ಗುತ್ತಿಗೆಗಳನ್ನು ಮಂಜೂರು ಮಾಡಲಾಗಿರುತ್ತದೆ.<br>• ಸದರಿ ಕಲ್ಲುಗಣಿ ಗುತ್ತಿಗೆಗಳಲ್ಲಿ 91 ಕಲ್ಲುಗಣಿ ಗುತ್ತಿಗೆಗಳ ಅವಧಿ ಮುಕ್ತಾಯವಾಗಿರುತ್ತದೆ.<br>• ಉಳಿದ 25 ಕಲ್ಲುಗಣಿ ಗುತ್ತಿಗೆಗಳನ್ನು ಪರಿಸರ ತೀರುವಳಿ ಪತ್ರ ಪಡೆಯದ ಕಾರಣ ದಿನಾಂಕ10.01.2020 ರಂದು ನಡೆದ ಜಿಲ್ಲಾ ಟಾಸ್ಕ್‌ಫೋರ್ಸ್ ಸಮಿತಿ ಸಭೆಯಲ್ಲಿ ರದ್ದುಪಡಿಸಲು ನಿರ್ಣಯಿಸಿ, ಅದರಂತೆ ದಿನಾಂಕ 30.01.2020 ರಂದು ರದ್ದುಪಡಿಸಲಾಗಿರುತ್ತದೆ.<br>• ಬೇಬಿ ಬೆಟ್ಟದ ವ್ಯಾಪ್ತಿಯಲ್ಲಿ, ಪ್ರಸ್ತುತ, 01 ಕಲ್ಲುಗಣಿ ಗುತ್ತಿಗೆಯು ಚಾಲ್ತಿಯಲ್ಲಿದ್ದು, ಸದರಿ ಗುತ್ತಿಗೆ ಪ್ರದೇಶದಲ್ಲಿ ಗಣಿಗಾರಿಕೆ ಸ್ಥಗಿತಗೊಂಡಿರುತ್ತದೆ. |
| (ಆ) | ಸ್ಫೋಟಕ ಸಿಡಿಸಿ ಕಲ್ಲು ಗಣಿಗಾರಿಕೆ ಮಾಡಲು ಯಾವ ಯಾವ ಇಲಾಖೆಗಳಿಂದ ಅನುಮತಿ ಬೇಕಾಗಿದೆ; ಮಂಡ್ಯ ಜಿಲ್ಲೆಯ ಪಾಂಡವಪುರ ತಾಲ್ಲೂಕು ಬೇಬಿ ಬೆಟ್ಟದಲ್ಲಿ ಕಲ್ಲು ಗಣಿಗಾರಿಕೆ ಮಾಡಲು ಅನುಮತಿ ನೀಡದಿದ್ದಲ್ಲಿ, ಇದುವರೆಗೆ ಎಷ್ಟು ಜನರ ಮೇಲೆ ಕೇಸು ದಾಖಲಿಸಿ ಕ್ರಮ ಕೈಗೊಳ್ಳಲಾಗಿದೆ; | • ಕಲ್ಲುಗಣಿಗಾರಿಕೆಯಲ್ಲಿ ಸ್ಫೋಟಕ ಬಳಕೆ ಮಾಡಲು Mines Act, 1952 ಹಾಗೂ Explosive Rules, 2008 ರಂತೆ Director General Mines Safety ರವರಿಂದ ಸ್ಫೋಟಕ ಪರವಾನಿಗೆ ಪಡೆಯಬೇಕಾಗಿರುತ್ತದೆ.<br>• ಅನಧಿಕೃತ ಕಲ್ಲು ಗಣಿಗಾರಿಕೆ ಸಂಬಂಧ ಮಂಡ್ಯ ಜಿಲ್ಲೆ, ಪಾಂಡವಪುರ ತಾಲ್ಲೂಕು, ಬೇಬಿ ಬೆಟ್ಟದ ವ್ಯಾಪ್ತಿಯಲ್ಲಿ 2014-15 ರಿಂದ 2021-22ನೇ ಸಾಲಿನವರೆಗೆ 28 ಪ್ರಕರಣಗಳನ್ನು ದಾಖಲಿಸಿ, ರೂ.1,56,49,000/-ಗಳ ದಂಡವನ್ನು ವಿಧಿಸಿ ಕ್ರಮ ವಹಿಸಲಾಗಿರುತ್ತದೆ.<br>• 2021-22ನೇ ಸಾಲಿನಲ್ಲಿ ಕಲ್ಲು ಗಣಿಗಾರಿಕೆಯಲ್ಲಿ ಅನಧಿಕೃತ ಸ್ಫೋಟಕ ಸಂಬಂಧ 07 ಮೊಕದ್ದಮೆಗಳನ್ನು ದಾಖಲಿಸಲಾಗಿದೆ. |

| | | |
|---|---|---|
| (ಇ) | ಜಿಲ್ಲಾಡಳಿತದ ಗಮನಕ್ಕೆ ಬಾರದೆ ಕಲ್ಲು ಗಣಿಗಾರಿಕೆ ನಡೆಯುತ್ತಿರುವುದು ನಿಜವೇ; ಅಕ್ರಮ ಗಣಿಗಾರಿಕೆ ನಡೆಸುತ್ತಿದ್ದಲ್ಲಿ, ನೇರವಾಗಿ ಕ್ರಮ ಕೈಗೊಳ್ಳಲು ಇರುವ ಸಮಸ್ಯೆಗಳೇನು; | ಅಕ್ರಮ ಗಣಿಗಾರಿಕೆ ಸಂಬಂಧ ಜಿಲ್ಲಾ ಟಾಸ್ಕ್ ಪೋರ್ಸ್ ಸಮಿತಿಯಿಂದ ಕ್ರಮ ವಹಿಸಿದ್ದು, ಈ ಸಂಬಂಧ 2014-15 ರಿಂದ 2021-22 ನೇ ಸಾಲಿನವರೆಗೆ 28 ಪ್ರಕರಣಗಳನ್ನು ದಾಖಲಿಸಿ ರೂ.1,56,49,000/- ಗಳ ದಂಡವನ್ನು ವಿಧಿಸಿ ಕ್ರಮವಹಿಸಲಾಗಿರುತ್ತದೆ.<br><br>ಅನಧಿಕೃತ ಕಲ್ಲು ಗಣಿಗಾರಿಕೆ ಚಟುವಟಿಕೆಗಳನ್ನು ತಡೆಗಟ್ಟಲು ಜಿಲ್ಲಾ ಟಾಸ್ಕ್ ಪೋರ್ಸ್ (ಗಣಿ) ಸಮಿತಿಯಿಂದ ಕಂದಾಯ, ಅರಣ್ಯ, ಪಂಚಾಯತ್ ರಾಜ್ ಇಲಾಖೆ, ಪೊಲೀಸ್ ಹಾಗೂ ಗಣಿ ಮತ್ತು ಭೂವಿಜ್ಞಾನ ಇಲಾಖೆ ಅಧಿಕಾರಿಗಳನ್ನು ಒಳಗೊಂಡ ಚಾಲಿತ ದಳವನ್ನು ರಚಿಸಿ 24x7 ಕಾರ್ಯಚರಣೆ ನಡೆಸಲಾಗುತ್ತಿದೆ. ಆಯಾಕಟ್ಟಿನ ಪ್ರದೇಶಗಳಲ್ಲಿ 11 ಖನಿಜ ತನಿಖಾ ಠಾಣೆಗಳನ್ನು ಸ್ಥಾಪಿಸಿ ಕಾರ್ಯ ನಿರ್ವಹಿಸಲಾಗುತ್ತಿದೆ. |
| (ಈ) | ಗಣಿಗಾರಿಕೆಗೆ ಅನುಮತಿಯೇ ನೀಡದಿದ್ದಲ್ಲಿ, ಅನುಮತಿ ನೀಡದ ಗಣಿಗಾರಿಕೆಯನ್ನು ಯಾವ ನಿಯಮಗಳ ಅನ್ವಯ ನಿಷೇದಿಸಲಾಗಿದೆ; | ಮಂಡ್ಯ ಜಿಲ್ಲೆಯಲ್ಲಿ ಅಧಿಕೃತವಾಗಿ ಪರವಾನಿಗೆ ಪಡೆದು ನಿಯಮಾನುಸಾರ ಗಣಿಗಾರಿಕೆ ನಡೆಸುತ್ತಿರುವ ಕಲ್ಲುಗಣಿ ಗುತ್ತಿಗೆಗಳ ಪ್ರದೇಶದಲ್ಲಿ ಗಣಿಗಾರಿಕೆಯನ್ನು ಸ್ಥಗಿತಗೊಳಿಸಿರುವುದಿಲ್ಲ. ಆದರೆ ಕಲ್ಲುಗಣಿಗಾರಿಕೆಗೆ ಪರವಾನಿಗೆ ಪಡೆದು ಪರಿಸರ ತೀರುವಳಿ ಪತ್ರ ಪಡೆದು ಸಲ್ಲಿಸದೆ ಗಣಿಗಾರಿಕೆ ನಡೆಸುತ್ತಿದ್ದ 41 ಕಲ್ಲು ಗಣಿಗುತ್ತಿಗೆಗಳು ಹಾಗೂ ನಿಯಮ ಉಲ್ಲಂಘಿಸಿ ಗಣಿಗಾರಿಕೆ ನಡೆಸುತ್ತಿದ್ದ 01 ಕಲ್ಲುಗಣಿ ಗುತ್ತಿಗೆ ಸೇರಿದಂತೆ ಒಟ್ಟು 42 ಕಲ್ಲುಗಣಿ ಗುತ್ತಿಗೆಗಳನ್ನು ಜಿಲ್ಲಾ ಟಾಸ್ಕ್ ಪೋರ್ಸ್ (ಗಣಿ) ಸಮಿತಿ ಸಭೆಯಲ್ಲಿ ನಿರ್ಣಯ ಕೈಗೊಂಡು ರದ್ದುಪಡಿಸಲಾಗಿರುತ್ತದೆ. |
| (ಉ) | ಈ ಅಕ್ರಮ ಗಣಿಗಾರಿಕೆಯಿಂದ ಕೆ.ಆರ್.ಎಸ್. ಡ್ಯಾಮ್ ಬಿರುಕು ಬಿಡುತ್ತಿರುವ ಕುರಿತು ಸರ್ಕಾರದ ನಿಲುವೇನು? | **ಕರ್ನಾಟಕ ರಾಜ್ಯ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರ (ಕೆ.ಎಸ್.ಎನ್.ಡಿ.ಎಂ.ಸಿ) ದಿನಾಂಕ 25.09.2018 ರಂದು ನೀಡಿರುವ ವರದಿಯಲ್ಲಿ, ಕೆ.ಆರ್.ಎಸ್. ಆಸುಪಾಸಿನಲ್ಲಿ ನಡೆಯುತ್ತಿರುವ ಗಣಿಗಳಲ್ಲಿ ಉಪಯೋಗಿಸಿರುವಂತಹ ಸ್ಫೋಟಕದಿಂದಾಗಿ ಕೆಆರ್ ಎಸ್. ಅಣೆಕಟ್ಟೆಯ ರಚನೆಗೆ ತೊಂದರೆ ಇಲ್ಲವೆಂದು ತಿಳಿಸಲಾಗಿರುತ್ತದೆ.**<br><br>**ಜಿಲ್ಲಾಧಿಕಾರಿ, ಮಂಡ್ಯ ಜಿಲ್ಲೆ ಇವರು ಕೆಆರ್ಎಸ್ ಅಣೆಕಟ್ಟೆಯ ಸುರಕ್ಷತಾ ದೃಷ್ಟಿಯಿಂದ ಅಣೆಕಟ್ಟೆಯ 20 ಕಿ.ಮೀ. ವ್ಯಾಪ್ತಿಯಲ್ಲಿ ಬರುವ ಪಾಂಡವಪುರ ತಾಲ್ಲೂಕಿನ ವ್ಯಾಪ್ತಿಯಲ್ಲಿ ಯಾವುದೇ ತರಹದ ಸ್ಫೋಟಕಗಳನ್ನು ಬಳಸಿ, ಗಣಿಗಾರಿಕೆ / ಕ್ರಷರ್ ಚಟುವಟಿಕೆಗಳನ್ನು ನಡೆಸದಂತೆ ದಿನಾಂಕ 28.08.2019 ರಿಂದ ಮುಂದಿನ ಆದೇಶದವರೆಗೆ ನಿಷೇಧಿಸಿ ಆದೇಶಿಸಿರುತ್ತಾರೆ.** |

ಸಂಖ್ಯೆ ಸಿಐ 437 ಎಂಎಂಎನ್ 2021

Halappa B.A.

**(ಆಚಾರ್ ಹಾಲಪ್ಪ ಬಸಪ್ಪ)**

ಗಣಿ ಮತ್ತು ಭೂವಿಜ್ಞಾನ ಹಾಗೂ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು ವಿಕಲಚೇತನರ, ಹಿರಿಯ ನಾಗರಿಕರ ಸಬಲೀಕರಣ ಸಚಿವರು.